ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಬೆಂಗಳೂರು ಕುಡಿಯುವ ನೀರಿನ ಗುಣಮಟ್ಟ ಕಳಪೆಯಾಗಿರುವ ಬಗ್ಗೆ

ಶ್ರೀ ಟಿ.ಎ. ಶರವಣ (ವಿಧಾನಸಭೆಯಿಂದ ಚುನಾಯಿತರಾದವರು):-

785 (936) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ಮಹಾನಗರಕ್ಕೆ ಸರಬರಾಜು ಆಗುತ್ತಿರುವ ಕುಡಿಯುವ ನೀರಿನ ಗುಣಮಟ್ಟವನ್ನು ಪರೀಕ್ಷೆ ಮಾಡಿಸಲಾಗುತ್ತಿದೆಯೇ ; ಹಾಗಿದ್ದಲ್ಲಿ, ಇತ್ತೀಚೆಗೆ ಗುಣಮಟ್ಟ ಪರೀಕ್ಷೆಯನ್ನು ಯಾವಾಗ ಮಾಡಿಸಲಾಗಿದೆ ;

(ಆ) ಕುಡಿಯುವ ನೀರಿನ ಗುಣಮಟ್ಟವನ್ನು ಸದ್ಯ ಪರೀಕ್ಷೆ ಮಾಡುತ್ತಿರುವ ಸಂಸ್ಥೆಯ ಹೆಸರೇನು ; ಮತ್ತು ಅದು ನಿಗದಿತ ಮಾನದಂಡವನ್ನು ಹೊಂದಿದೆಯೇ ;

(ಇ) ಶುದ್ಧ ಕುಡಿಯುವ ನೀರು ಎಂದು ಹೇಳಲು ಇರಬೇಕಾದಂತಹ ಅತ್ಯಾವಶ್ಯಕವಾದ ಮಾನದಂಡಗಳಾವುವು ; ಅವು ಬೆಂಗಳೂರಿಗೆ ಸರಬರಾಜು ಆಗುತ್ತಿರುವ ನೀರಿನಲ್ಲಿ ನಿಗದಿತ ಮಟ್ಟದಲ್ಲಿ ಇವೆಯೇ;

(ಈ) ಈ ಹಿಂದೆ ಪರೀಕ್ಷೆಗೊಳಪಡಿಸಲು ಬೆಂಗಳೂರಿನ ಯಾವ ಯಾವ ಭಾಗಗಳಿಂದ ನೀರಿನ ಮಾದರಿಯನ್ನು ಪಡೆಯಲಾಗಿತ್ತು ; ಮತ್ತು ಅವುಗಳ ವರದಿಯನ್ನು ನೀಡುವುದು ;

(ಉ) ಬೆಂಗಳೂರು ಮಹಾನಗರಕ್ಕೆ ಕುಡಿಯಲು ಪೂರೈಕೆಯಾಗುತ್ತಿರುವ ನೀರು ವಿಷಪ್ರಾಶನವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ಅದರ ನಿವಾರಣೆಗೆ ತೆಗೆದುಕೊಂಡ ಕ್ರಮಗಳ ಮಾಹಿತಿ ನೀಡುವುದು ?